



# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 26


| ಸಂಪುಟ: ೦೩ ಸಂಚಿಕೆ: ೧೨ | ಮಾರ್ಚ್ ೨೦೧೭ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 03 Issue 12 | March 2017 | Pages - 8 | A. Sub. - Rs. 20/- | Editor : Sri. B.R. Ravindranath |




**ಚಂದಾ ವಿವರಗಳು**

ವಾರ್ಷಿಕ ಚಂದಾ
ರೂ. ೨೦/–

ಐದು ವರ್ಷಗಳ ಚಂದಾ
ರೂ. ೧೦೦/–


ವಿಳಾಸ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:
೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org


## ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಜನವರಿ 2016––ಫೆಬ್ರವರಿ 2017 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

"ರಂಗ ಸಂವಾದ–6"
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ಗ್ರೀನ್ ಸ್ಟೇಜ್ ಸಹಯೋಗದಲ್ಲಿ ನಾಟಕ
ನಾಟಕ :ಕ್ರೆಡಿಟ್ ಕಾರ್ಡ ಬೇಕೆ
ರಚನೆ: ರವೀಂದ್ರನಾಥ್
ನಿರ್ದೇಶನ : ಶ್ರೀ ವಿಜಯ್ .ಎ

ಪ್ರತಿ ತಿಂಗಳೂ ಕೊನೆಯ ಶನಿವಾರ ಸಂಜೆ ನಡೆಯುವ ಬಿ.ಎಂ.ಶ್ರೀ. ಪ್ರತಿಷ್ಠಾನ ಮತ್ತು ಗ್ರೀನ್ ಸ್ಟೇಜ್ ಸಹಯೋಗದಲ್ಲಿ ನಡೆಸಲಾಗುವ 'ರಂಗ ಸಂವಾದ' ಕಾರ್ಯಕ್ರಮದಲ್ಲಿ ಸಾಮಾಜಿಕ ಚಿಂತನೆಗಳನ್ನು ಒಳಗೊಳ್ಳುವ ನಾಟಕಗಳ ಪ್ರದರ್ಶನ ಮಾಡಲಾಗುತ್ತದೆ. 28–01–2016 ರಂದುಈ ಮಾಲೆಯಡಿಯಲ್ಲಿಕ್ರೆಡಿಟ್ ಕಾರ್ಡ್ ಬಳಕೆ ಮಾಡುವಲ್ಲಿ ಎಚ್ಚರಿಕೆ ವಹಿಸಬೇಕೆಂಬ ಸಂದೇಶ ನೀಡುವ "ಕ್ರೆಡಿಟ್ ಕಾರ್ಡ ಬೇಕೆ" ಎಂಬ ನಾಟಕದ ಪ್ರದರ್ಶನ ಮಾಡಲಾಯಿತು. ಮೊದಲಿಗೆ ರವೀಂದ್ರನಾಥ ಅವರು ಎಲ್ಲರನ್ನೂ ಸ್ವಾಗತಿಸಿದರು. ಕ್ರೆಡಿಟ್ ಕಾರ್ಡ್ ಬಳಕೆ ಬಗ್ಗೆ ಚರ್ಚೆ ನಡೆಯಿತು. ಡಾ. ಪಿ ವಿ ನಾರಾಯಣ ವಂದನಾರ್ಪಣೆ ಸಲ್ಲಿಸಿದರು.




### ಲೋಚನ ವಿದ್ವತ್ ಪತ್ರಿಕೆಗೆ ಮಾನ್ಯತೆ




ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಸಚಿವಾಲಯದ ಉನ್ನತ ಶಿಕ್ಷಣ ಇಲಾಖೆಯು ಭಾರತೀಯ ಭಾಷಾ ಸಂಸ್ಥಾನದ ಮೂಲಕ ಕೊಡಮಾಡುವ ಕಿರು ಪತ್ರಿಕೆ ಅನುದಾನ ಯೋಜನೆ ಅಡಿಯಲ್ಲಿ ಲೋಚನ ವಿದ್ವತ್ ಪತ್ರಿಕೆ ಆಯ್ಕೆಗೊಂಡಿದ್ದು ಪ್ರತಿ ವರ್ಷ **ರೂ.20000/–** ಮೊತ್ತದ ಅನುದಾನವನ್ನು ಪಡೆಯಲು ಅರ್ಹಗೊಂಡಿರುತ್ತದೆ. ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಸಂಬಂಧ ಪಟ್ಟ ಎಲ್ಲಾ ಅಧಿಕಾರ ವರ್ಗದವರಿಗೆ ಆಭಾರಿಯಾಗಿರುತ್ತದೆ.

## ಸಂಪಾದಕೀಯ

ತಂತ್ರಜ್ಞಾನ ಸದಾಕಾಲ ನಾಗಾಲೋಟದಿಂದ ಸುಧಾರಣೆಗೊಳ್ಳುತ್ತಿರುವ ಕ್ಷೇತ್ರ. ಮಾನವನ ಶ್ರಮವನ್ನು ಕಡಿಮೆಗೊಳಿಸುವತ್ತ ಸೃಷ್ಟಿಸಲಾಗಿರುವ ಯಂತ್ರಗಳ ಸಾಮರ್ಥ್ಯ ಸುಧಾರಿತಗೊಳ್ಳುತ್ತಿದ್ದು ಮಾನವ ಮಾಡುತ್ತಿದ್ದ/ಮಾಡುತ್ತಿರುವ ಬಹಳಷ್ಟು ಕೆಲಸಗಳನ್ನು ಕಬಳಿಸುತ್ತಿವೆ. ಒಂದು ಅಂದಾಜಿನಂತೆ ಇಂದಿನ ಪ್ರಪಂಚದಲ್ಲಿ ಸುಮಾರು 800 ರೀತಿಯ ಕೆಲಸಗಳ ವರ್ಗಗಳಿವೆ. ಅವುಗಳ ಪೈಕಿ ಶೇ.30 ರಷ್ಟನ್ನು ಯಂತ್ರಗಳು ಮಾಡಲು ಸಾಧ್ಯವಿದೆ. ಇನ್ನು ಮುಂದೆ ಬಹುತೇಕ ವಾಡಿಕೆಯ ಕೆಲಸಗಳನ್ನು ಯಂತ್ರಗಳೇ ಮಾಡುತ್ತವೆ. 2035ನ ಇಸವಿಯ ವೇಳೆಗೆ ಶೇ.50 ರಷ್ಟುರೀತಿಯ ಕೆಲಸಗಳು ಇಲ್ಲವಾಗುತ್ತವೆ. ಉದಾಹರಣೆಗೆ 2035ರಲ್ಲಿ ಶೇ.90 ರಷ್ಟು ವಾಹನಗಳು ವಿದ್ಯುತ್‌ಚಾಲಿತ ಸ್ವಯಂಚಾಲಿತ ವಾಹನಗಳಾಗಿರುತ್ತವೆ.

ಇಂಗ್ಲೀಷ್ ಭಾಷೆಯನ್ನು ಕಲಿತಲ್ಲಿ ಮಾತ್ರಆದಾಯ ಗಳಿಕೆ ಸಾಧ್ಯ ಎಂಬ ನಂಬಿಕೆಯಿಂದ ನಮ್ಮದೇಶದಲ್ಲಿನ ಬಹುತೇಕ ಯುವ ಜನರು ತಮ್ಮ ಮಾತೃ ಭಾಷೆಗಳನ್ನು ಹಾಗೂ ಜ್ಞಾನಾರ್ಜನೆ ಕಡೆಗಣಿಸಿ ಇಂಗ್ಲೀಷ್ ಕಲಿಯಲು ಹರಸಾಹಸ ಪಡುತ್ತಿದ್ದಾರೆ. ಇಂದು ಕಷ್ಟಪಟ್ಟು ಕಲಿತ ಕೌಶಲಗಳು ನಾಳೆ ನಿಷ್ಪ್ರಯೋಜಕವಾಗಬಹುದು ಎಂಬ ಆತಂಕವಿರುವಾಗ ಕೆಳ ಮಟ್ಟದ ಮಧ್ಯಮ ಮಟ್ಟದ ಉದ್ಯೋಗಗಳಿಗೆ ಸೇರಿಕೊಳ್ಳುವ ಉದ್ದೇಶದಿಂದ ಇಂಗ್ಲೀಷ್ ಕಲಿಯುವ ಸಾಹಸವನ್ನು ಬಹುತೇಕ ಯುವ ಜನರು ಮುಂದುವರೆಸುತ್ತಿದ್ದಾರೆ. ಜ್ಞಾನ ಹಾಗೂ ಕೌಶಲಗಳು ಭಾಷೆಯನ್ನು ಅವಲಂಬಿಸಿರುವುದಿಲ್ಲ ಎಂಬ ಸರಳ ಸತ್ಯವನ್ನು ತಿಳಿಸಲು ನಮ್ಮ ದೇಶದ ಬುದ್ಧಿಜೀವಿಗಳಿಗೆ ಅಥವಾ ಸರ್ಕಾರಗಳಿಗೆ ಸಾಧ್ಯವಾಗದೇ ಇಂದಿನ ಮಾರುಕಟ್ಟೆಯ ಒತ್ತಡಗಳಿಗೆ ಎಲ್ಲರೂ ಶರಣಾಗಿದ್ದಾರೆ. ಇಂಗ್ಲೀಷ್‌ಕಲಿಯುವ ಭರದಲ್ಲಿ ನಷ್ಟಗೊಳ್ಳುತ್ತಿರುವ ಕೌಶಲಗಳ ಬಗ್ಗೆಯಾಗಲೀ, ಅದರಿಂದಕಾರಣವಾಗುತ್ತಿರುವ ಕೀಳರಿಮೆಯ ಬಗ್ಗೆಯಾಗಲೀ, ಇಂಗ್ಲಿಷ್ ಶಿಕ್ಷಣ ಪಡೆದವರ ಹಾಗೂ ಇಂಗ್ಲಿಷ್ ಶಿಕ್ಷಣ ಪಡೆಯದವರ ನಡುವಿನ ಬಿರುಕು ಹೆಚ್ಚಾಗುತ್ತಿರುವ ಬಗ್ಗೆಯಾಗಲೀಯಾರೂ ಗಮನ ನೀಡದಿರುವುದುಆತಂಕಕಾರಿಯಾಗಿರುತ್ತದೆ. ನಮ್ಮ ಭಾಷೆಯಲ್ಲಿಜ್ಞಾನ ಹಾಗೂ ಕೌಶಲಗಳನ್ನು ನೀಡಲು ಇಂದಿಗೂ ಸಾಧ್ಯವಾಗದಿರುವುದು ನಮ್ಮ ವೈಫಲ್ಯಎಂಬುದನ್ನುಅರಿತು ಸೂಕ್ತ ಕ್ರಮಗಳನ್ನು ಕೈಗೊಳ್ಳಬೇಕಾದ ತುರ್ತು ಅನಿವಾರ್ಯತೆ ಈಗ ಕಾಣುತ್ತಿದೆ.

ಡಾ. ಸರೋಜಿನಿ ಮಹಿಷಿ ವರದಿ ಸಲ್ಲಿಸಿದ 18 ವರ್ಷಗಳ ನಂತರ ನಮ್ಮ ನಾಡಿನಯುವಜನರಿಗೆ ಕೆಳಮಟ್ಟದ ಕೆಲಸಗಳನ್ನು ನೀಡುವ ಸಲುವಾಗಿ ಶೇ 100 ರಷ್ಟು ಮೀಸಲಾತಿ ಬೇಕು ಎಂದು ಅಂದು ಕೇಳಿದರೂ ದೊರಕಲಿಲ್ಲ ಹಾಗೂ ಅದೇ ಮೀಸಲಾತಿಯನ್ನುಇಂದೂ ಕೇಳುತ್ತಿದ್ದೇವೆ. ನಾವು ಯಾವ ಕೆಲಸಗಳಿಗಾಗಿ ದಶಕಗಳ ಕಾಲ ಹೋರಾಟ ಮಾಡುತ್ತಿದ್ದೇವೋ ಅಂತಹ ಕೆಲಸಗಳೇ ಇಲ್ಲವಾದಲ್ಲಿ ನಮ್ಮ ಮುಂದಿನ ಪೀಳಿಗೆಯವರ ಗತಿ ಏನು ಎಂಬುದರ ಬಗ್ಗೆ ಚಿಂತನೆಗಳು ಪ್ರಾರಂಭವಾಗಬೇಕು.

ಹೊಂಗನಸು ಪತ್ರಿಕೆಯನ್ನು ಹೆಚ್ಚು ವರ್ಣರಂಜಿತ ಹಾಗೂ ಹೆಚ್ಚು ಉಪಯುಕ್ತವಾಗಿ ಮಾಡಲು ಶ್ರಮಿಸುತ್ತಿದ್ದೇವೆ. ನಿಮ್ಮ ಸಲಹೆಗಳು ಹಾಗೂ ಪ್ರತಿಕ್ರಿಯೆಗಳಿಗೆ ಸ್ವಾಗತ.

ಬಿ.ಆರ್ ರವೀಂದ್ರನಾಥ್
ಸಂಪಾದಕರು......

### ಮಾರ್ಚ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಮುಳಿಯ ತಿಮ್ಮಪ್ಪಯ್ಯ | 3–3–1888 |
| ಪಿ.ಲಂಕೇಶ | 8–3–1935 |
| ಡಿವಿಜಿ | 17–3–1887 |
| ಪುತಿನ | 17–3–1905 |
| ಎಂ. ಗೋವಿಂದಪೈ | 23–3–1883 |

### ಮಾರ್ಚ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಸಿಂಪಿ ಲಿಂಗಣ್ಣ | 5–3–1993 |
| ಜಿ ಪಿ ರಾಜರತ್ನಂ | 13–3–1979 |
| ಯಶವಂತ ಚಿತ್ತಾಲ | 22–3–2014 |
| ಶಾಂತಿನಾಥ ದೇಸಾಯಿ | 26–3–1998 |

## ಆಧುನಿಕ ವಚನಗಳು

–ಜಿ. ಅಬ್ದುಲ್ ಬಷೀರ್

ಸರಕಾರಗಳು ಬಂದವು
ಸರಕಾರಗಳು ಹೋದವು
ಅಶನದ ಸಮಸ್ಯೆ ನೀಗಲಿಲ್ಲ
ವಸನದ ಸಮಸ್ಯೆ ಹೋಗಲಿಲ್ಲ
ಅಶನ ವಸನಗಳು ಅವರಿಗೇ ಸಾಲದಾದಾಗ ॥17॥

## ಬುದ್ಧ–ಕನಕ : ತಾತ್ವಿಕ ಅನುಸಂಧಾನ



ರಾಷ್ಟ್ರೀಯ ಪಂಪಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನ ಕೇಂದ್ರ ಹಾಗೂ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸಹಯೋಗದಲ್ಲಿ ಮಾರ್ಚ 10, 2017 ಶುಕ್ರವಾರದಂದು ಬಿ.ಎಂ.ಶ್ರೀ ಸ್ಮಾರಕದ ಪ್ರತಿಷ್ಠಾನ ಎಂ.ವಿ.ಸೀ ಸಭಾಂಗಣದಲ್ಲಿ ಒಂದು ದಿನದ ವಿಚಾರ ಸಂಕಿರಣವನ್ನು ಆಯೋಜಿಸಲಾಗಿದೆ.



ಕನಕದಾಸರು ಕನ್ನಡದ ಮಾತ್ರವಲ್ಲ ಭಾರತೀಯ ತತ್ವಚಿಂತನೆಯ ದೊಡ್ಡ ಹೆಸರು.ಇವರು ನಾಲ್ಕು ಕಾವ್ಯ ಮತ್ತು 300 ಕ್ಕೂ ಮಿಗಿಲಾದ ಕೀರ್ತನೆಗಳನ್ನು ರಚಿಸಿದ್ದು ಅವನ್ನು ಪ್ರಧಾನವಾಗಿ ವೈಷ್ಣವ ಅದರಲ್ಲೂ ಮಾಧ್ವ ಸಂಪ್ರದಾಯದ ನೆಲೆಯಿಂದ ಈವರೆಗೆ ಅಧ್ಯಯನ ಮಾಡಿಕೊಂಡು ಬರಲಾಗಿದೆ.ಆದರೆ ಅವರಲ್ಲಿ ಶೈವ ನಾಥ ಸಂಪ್ರದಾಯದ ರಚನೆಗಳಿರುವುದನ್ನು ಡಾ.ಶಂಕರ ಮೊಕಾಶಿ ಪುಣೇಕರರು ತೋರಿಸಿದ್ದಾರೆ.ಇದರ ಹೊರತಾಗಿಯೂ ಕನಕನ್ನು ಬೇರೆ ಬೇರೆ ನೆಲೆಗಳಲ್ಲಿ ಹೊಸದಾಗಿ ಅಧ್ಯಯನ ಮಾಡಬಹುದು ಎನ್ನುವುದಕ್ಕೆ ಬೌದ್ಧ ತತ್ವ ಚಿಂತನೆಗೆ ಕನಕದಾಸರ ಕಾವ್ಯ ಮತ್ತು ಕೀರ್ತನೆಗಳನ್ನು ಅನ್ವಯಿಸಿ ನೋಡಬಹುದು.ಯೋಗ, ಸಹಜಯಾನ ಮತ್ತು ಮಹಾಯಾನದ ನಾಗಾರ್ಜುನನ ನೆಲೆಯಲ್ಲಿ ಮತ್ತು ಬುದ್ಧಗುರುವಿನ ಅಷ್ಟಾಂಗಮಾರ್ಗದ ನೆಲೆಯಲ್ಲಿ ಅವರ ರಚನೆಗಳನ್ನು ನೋಡಬಹುದು. ಬಯಲು ಆಲಯದ ಪರಿಕಲ್ಪನೆಯಂತೂ ನೇರವಾಗಿ ಬೌದ್ಧ ಚಿಂತನೆಯೇ ಆಗಿದೆ. ಕರ್ನಾಟಕದಲ್ಲಿ ಸನ್ನತಿ, ಹಸರ್‌ಗುಂಡಿ, ಬೆಂಗಳೂರಿನ ರಾಜಘಟ್ಟ, ಬಳ್ಳಿಗಾವೆ ಇವು ಪ್ರಮುಖ ಬೌದ್ಧ ಕೇಂದ್ರಗಳಾಗಿದ್ದು ಕನಕದಾಸರು ಅಲೆಮಾರಿ ಬಿಡಿ ಸಂತರಾಗಿದ್ದರಿಂದ, ಯಾವುದೇ ಮಠಸ್ಥಾಪನೆ ಮಾಡದೆ ಸಂಚಾರಿಗಳಾಗಿದ್ದರಿಂದ ಬೌದ್ಧಚಿಂತನೆಯನ್ನು ಕೂಡ ಅನುಸಂಧಾನಿಸಿ ಅರಗಿಸಿಕೊಂಡಿದ್ದರು.ಈ ನೆಲೆಯಲ್ಲಿ ವಿವೇಚಿಸುವ ಆಶಯ ಈ ಸಂಕಿರಣದ್ದು.

ವಿಚಾರ ಸಂಕಿರಣದಲ್ಲಿ ಆ ಕೆಳಕಂಡ ವಿಷಯಗಳ ಮಂಡನೆ ಮತ್ತು ಚರ್ಚೆಗಳು ನಡೆಯುತ್ತವೆ.

1. ಬೌದ್ಧಧರ್ಮ ಮತ್ತು ಭಕ್ತಿಪಂಥದ ತಾತ್ವಿಕ ನೆಲೆಗಳು – ಡಾ. ಕೇಶವ ಮಳಗಿ
2. ಯೋಗ ಮತ್ತು ತಂತ್ರಪ್ರಸ್ಥಾನಗಳು ಮತ್ತು ಕನಕದಾಸರ ಅಭಿವ್ಯಕ್ತಿ – ಡಾ. ಜಿ.ಬಿ.ಹರೀಶ
3. ಬೌದ್ಧ ಚಿಂತನೆ ಹಿನ್ನೆಲೆಯಲ್ಲಿ 'ನೀ ಮಾಯೆಯೊಳಗೋ ನಿನ್ನೊಳು ಮಾಯೆಯೋ' – ಶ್ರೀಮತಿ ಚಿತ್ರಾ ಲಕ್ಷ್ಮೀಪತಿ
4. ಮಧ್ಯಯುಗೀನ ಭಕ್ತಿಪಂಥ–ಭಿನ್ನ ಓದುಗಳು – ಡಾ. ಗೀತಾ ವಸಂತ, ತುಮಕೂರು

# ಮಾರ್ಚ್ 2017 ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು
## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ



### 01–03–2017 ಬುಧವಾರ ಸಂಜೆ– 6–00
ಗಮಕವಾಹಿನಿ–14

ಹೆಸರು: ಪಂಪಭಾರತ

ವಾಚನ : ಕು॥ ದ್ಯುತಿ ಜಾಗೀರ್ ದಾರ್

ವ್ಯಾಖ್ಯಾನ : ಡಾ॥ ಎಚ್.ಎಸ್. ಸತ್ಯನಾರಾಯಣ ನೇತೃತ್ವ– ಶ್ರೀಮತಿ ಶ್ರೀಮತಿ



### 4–03–2017 ಶನಿವಾರ ಸಂಜೆ 6:00
ವಿಷಯ :'ನನ್ನ ಕಾರ್ಟೂನ್ ಲೋಕ'

ನಡೆಸಿಕೊಡುವವರು : ಶ್ರೀ ಪಿ. ಆರ್. ಶ್ರೀಧರ



### 9–03–2017ಗುರುವಾರ ಸಂಜೆ 6–00
"ಅಕ್ಕರಗೊಟ್ಟಿ"

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ :ಪ್ರಾಗಿತಿಹಾಸದ ಶೋಧನ ವಿಧಾನಗಳು.

ಚಾಲನೆ: ಶ್ರೀ ಪಿ. ಶಿವತಾರಕ್



### 10–03–2017 ಶುಕ್ರವಾರ ಬೆಳಿಗ್ಗೆ 10.30
ಬುದ್ಧ–ಕನಕ : ತಾತ್ವಿಕ ಅನುಸಂಧಾನ

ಒಂದು ದಿನದ ವಿಚಾರ ಸಂಕಿರಣ

ರಾಷ್ಟ್ರೀಯ ಪಂಪಕವಿ ಕನಕದಾಸ ಅಧ್ಯಯನ ಮತ್ತು ಸಂಶೋಧನ ಕೇಂದ್ರ ಹಾಗೂ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸಹಯೋಗದಲ್ಲಿ

(ವಿವರಗಳು ಪುಟ 2)





### 11–03–2017 ಶನಿವಾರ ಸಂಜೆ –6–00
ಪಂಡಿತ್ ಟಿ. ಆರ್. ರಾಮಣ್ಣ ಮತ್ತು ಶ್ರೀಮತಿ ಪುಟ್ಟಮ್ಮ ದತ್ತಿ ಕಾರ್ಯಕ್ರಮ

ವಿಷಯ : ರಾಘವಾಂಕನ ಹರಿಶ್ಚಂದ್ರ ಕಾವ್ಯ

ಉಪನ್ಯಾಸಕರು: ಡಾ. ಬಿ.ನಂಜುಂಡ ಸ್ವಾಮಿ

### 14–03–2017 ಮಂಗಳವಾರ ಸಂಜೆ–6–00
ಕನ್ನಡ ಸಂಸ್ಕೃತಿ ದರ್ಶನ

ಕನ್ನಡ ಸಾಕ್ಷ್ಯಚಿತ್ರ ಪ್ರದರ್ಶನ





### 22–03–2017 ಬುಧವಾರ ಸಂಜೆ–6–00
ಡಾ॥ ಶಂಬಾಜೋಶಿ ದತ್ತಿ ಮತ್ತು ಡಾ.ಉಪ್ಪಂಗಳರಾಮಭಟ್ಟ ದತ್ತಿ

ವಿಷಯ : ಪಂಪಭಾರತ ಮತ್ತು ಸಂಗಂ ಸಾಹಿತ್ಯ

ಉಪನ್ಯಾಸಕರು : ಪ್ರೊ. ಶಿವರಾಮಯ್ಯ.

ನಿವೃತ್ತ ಕನ್ನಡ ಪ್ರಾಧ್ಯಾಪಕರು, ಹಿರಿಯ ಸಂಸ್ಕೃತಿ ಚಿಂತಕರು





### 25–03–2017 ಶನಿವಾರ ಸಂಜೆ – 6 :00
ರಂಗಸಂವಾದ–8

ನಾಟಕ : "ಇದು ಹತ್ಯೆಯೋ? ಆತ್ಮಹತ್ಯೆಯೋ?

ರಚನೆ ಮತ್ತು ನಿರ್ದೇಶನ : ಶ್ರೀ ವಿಜಯ್ ಎ.



### 27–03–2017 ಸೋಮವಾರ ಸಂಜೆ 6:00
ಶ್ರೀ ಕಣಕಟ್ಟೆ ಕೃಷ್ಣಮೂರ್ತಿರಾವ್ ದತ್ತಿ ಕಾರ್ಯಕ್ರಮ

ವಿಷಯ : ದೇವರನಾಮಗಳ ಹಾಡುಗಾರಿಕೆ

ಹಾಡುವವರು : ಶ್ರೀಮತಿ ಕಮಲಿನಿ ಹೆಗಡೆ

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಜನವರಿ 2017 – ಫೆಬ್ರವರಿ 2017 ತಿಂಗಳುಗಳಲ್ಲಿ ನಡೆದ ಕಾರ್ಯಕ್ರಮಗಳು

## ಶ್ರೀ ಮೋಹನ್ ದೇವ್ ಆಳ್ವ ಮತ್ತು ಡಾ॥ಎಂ.ಕೆ. ಶೈಲಜಾ ಆಳ್ವ ದತ್ತಿ : ದೇವರನಾಮ ಗಾಯನ ಸ್ಪರ್ಧೆ




ದಿನಾಂಕ : 22–01–2017ರಂದು ಭಾನುವಾರ ಬೆಳಗ್ಗೆ 10–30ಕ್ಕೆ ಶ್ರೀ ಕೆ. ಮೋಹನ್ ದೇವ್ ಆಳ್ವ ಮತ್ತು ಡಾ॥ ಎಂ.ಕೆ.ಶೈಲಜಾ ಆಳ್ವ ದತ್ತಿ ಕಾರ್ಯಕ್ರಮದಲ್ಲಿ 'ದೇವರನಾಮ ಸ್ಪರ್ಧೆ'ಯನ್ನು ಏರ್ಪಡಿಸಿತ್ತು.ಅದರಲ್ಲಿ 25ವರ್ಷದೊಳಗಿನ ಅಭ್ಯರ್ಥಿಗಳನ್ನು ಸ್ಪರ್ಧೆಗೆ ಕರೆಯಲಾಗಿತ್ತು.ಅದರಲ್ಲಿ 56ಮಂದಿ ಈಗಾಗಲೇ ನೋಂದಾಯಿಸಿ ಕೊಂಡಿದ್ದರು.ಆದರೆ 37ಮಂದಿ ವಿದ್ಯಾರ್ಥಿಗಳು ಭಾಗವಹಿಸಿದ್ದರು.ಎಲ್ಲಾ ವಿದ್ಯಾರ್ಥಿಗಳು ದೇವರನಾಮಗಳನ್ನು ತುಂಬಾ ಚೆನ್ನಾಗಿ ಹಾಡಿರುತ್ತಾರೆ.ತೀರ್ಪುಗಾರರಾಗಿ ಶ್ರೀಮತಿ ಕಮಲಿನಿ ಹೆಗಡೆ ಮತ್ತು ಕು॥ ತೇಜ್ವಸ್ವಿನಿ ಗೌರಿ ಅವರು ಬಂದಿದ್ದರು. ಮೊದಲನೆ ಬಹುಮಾನ ಕು॥ಸ್ವಾತಿ ದೇವಿಪ್ರಸಾದ್, ಎರಡನೇ ಬಹುಮಾನ ಕು॥ ಅನಘ ಪಿ.ಮತ್ತು ಮೂರನೇ ಬಹುಮಾನ ಕು॥ ದ್ಯುತಿ ಎಂಬ ವಿದ್ಯಾರ್ಥಿಗಳಿಗೆ ಬಹುಮಾನ ಬಂದಿದೆ.ಈ ಕಾರ್ಯಕ್ರಮದಲ್ಲಿ ಶ್ರೀ ಮೋಹನ್‌ದೇವ್ ಆಳ್ವ ಅವರು ಭಾಗವಹಿಸಿ ಪ್ರಶಸ್ತಿ ಪತ್ರಗಳನ್ನು ಭಾಗವಹಿಸಿದ ಎಲ್ಲಾ ವಿದ್ಯಾರ್ಥಿಗಳಿಗೂ ನೀಡಿ ಇದರ ಬಗ್ಗೆ ಎರಡು ಮಾತುಗಳನ್ನು ಹೇಳಿದರು.

## ಶ್ರೀ ಎಂ.ಎ.ರಾಮಾನುಜ ಐಯ್ಯಂಗಾರ್ ಮತ್ತು ಪ್ರೊ. ಬಿ. ರಾಮಸ್ವಾಮಿ ದತ್ತಿ ಕಾರ್ಯಕ್ರಮ

ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು, ಇರೊಂದಿಗೆ ಪ್ರತಿಷ್ಠಾನವು ಕೈ ಜೋಡಿಸಿ, ಮೂರು ದಿನಗಳ ಮೋಡಿ ಲಿಪಿ ಕಾರ್ಯಾಗಾರವನ್ನು ಪ್ರತಿಷ್ಠಾನದ ಆವರಣದಲ್ಲಿ ದಿನಾಂಕ




27–1–2017 ರಿಂದ 29–1–2017ರ ವರಗೆ ಯಶಸ್ವಿಯಾಗಿ ಆಯೋಜಿಸಲಾಗಿತ್ತು. ಈ ಕಾರ್ಯಾಗಾರದ ಉಪಯೋಗವನ್ನು ನಾಡಿನ ಕೆಲವು ವಿಶ್ವವಿದ್ಯಾಲಯಗಳ ಕನ್ನಡ ಅಧ್ಯಯನ ಕೇಂದ್ರದ ವಿದ್ಯಾರ್ಥಿಗಳು, ಸಂಸ್ಕೃತ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳು ಮತ್ತು ಇತರ ಹಿರಿಯರೂ ಸಹ ಪಡೆದು ಕೊಂಡರು.ಒಟ್ಟು 35 ಶಿಭಿರಾರ್ಥಿಗಳು ಕಾರ್ಯಾಗಾರದಲ್ಲಿ ಕಾರ್ಯಾಗಾರದಲ್ಲಿ ಭಾಗವಹಿಸಿ ದಾಖಲು ಸಾಹಿತ್ಯದ ಮಹತ್ವವನ್ನು ಅರಿತರು.ವಿದ್ಯಾರ್ಥಿಗಳಿಗೆ ನಾನಾ ಬಗೆ–ಯ ಲಿಪಿ ವಿನ್ಯಾಸದ ಮಾದರಿಗಳನ್ನು ತರಗತಿಯಲ್ಲಿ ನೀಡಿ ಅಭ್ಯಾಸಮಾಡುವ ಅವಕಾಶವನ್ನು ಕಲ್ಪಿಸಿಕೊಡಲಾಗಿತ್ತು.

ಪ್ರತಿಷ್ಠಾನದ ಅಧ್ಯಕ್ಷರಾದ ಡಾ॥ಪಿ.ವಿ.ನಾರಾಯಣ ಅವರು ಕಾರ್ಯಾಗಾರದ ಉದ್ಘಾಟನಾ ಸಮಾರಂಭದ ಮುಖ್ಯ ಅತಿ–ಥಿಯಾಗಿ ಭಾಗವಹಿಸಿದ್ದರು.ಡಾ॥ ಸದಾನಂದ ನೆಲಕುದ್ರಿ, ರಾಜ್ಯ ಪತ್ರಾಗಾರ ಇಲಾಖೆಯ ಸಹಾಯಕ ನಿರ್ದೇಶಕರು ಕಾರ್ಯಾಗಾರವನ್ನು ಉದ್ಘಾಟಿಸಿದರು.ನಿವೃತ್ತ ಕನ್ನಡ ಪ್ರಾಧ್ಯಾಪಕರು ಮತ್ತು ಪ್ರತಿಷ್ಠಾನದ ನಿಕಟ ವರ್ತಿಗಳಾದ ಡಾ॥ ಕೆ.ಆರ್.ಗಣೇಶ್ ಅವರು ಕಾರ್ಯಾಗರದ ಸಮಾರೋಪವನ್ನು ನೆರವೇರಿಸಿದರು.

## ಗಮಕವಾಹಿನಿ–12

01–02–2017



01–02–2017ರಂದು ಪ್ರತಿ ತಿಂಗಳ ಮೊದಲ ಬುಧವಾರ ನಡೆಯುವ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಮತ್ತು ವಾಗ್ದೇವಿ ಗಮಕ ಕಲಾ ಪ್ರತಿಷ್ಠಾನದ ಜಂಟಿ ಕಾರ್ಯಕ್ರಮವಾದ ಗಮಕವಾಹಿನಿ ಅಡಿಯಲ್ಲಿ ಶ್ರೀಮತಿ ಜಯರಾಂ, ರೇಖಾ ಪ್ರಸಾದ್, ಶ್ರೀದೇವಿ ಅಯ್ಯಂಗಾರ್ ಸುಮಾ ಸುದರ್ಶನ್, ಹೇಮಾ ರವಿಶಂಕರ, ದೀಪ್ತಿ ಅವರುಗಳು ಶ್ರೀಮತಿ ಜಯರಾಂ ಅವರ ನೇತೃತ್ವದಲ್ಲಿಕುಮಾರ ವ್ಯಾಸಭಾರತದಿಂದ "ದ್ರೌಪದಿ ವಿಜಯ" ಪ್ರಸಂಗದ ಗಮಕ ಕಾರ್ಯಕ್ರಮವನ್ನು ನಡೆಸಿಕೊಟ್ಟರು.

## ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ

ದಿನಾಂಕ 9ನೇ ಫೆಬ್ರವರಿ 2017 ರಂದು ರಾಷ್ಟ್ರಕವಿ ಜಿ. ಎಸ್. ಶಿವರುದ್ರಪ್ಪ ಹಾಗೂ ಡಾ.ಗೋಪಾಲಕೃಷ್ಣ ಅಡಿಗಅವರ ಬಗ್ಗೆಯ ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶಿಸಲಾಯಿತು.ರಾಷ್ಟ್ರಕವಿಜಿ. ಎಸ್. ಶಿವರುದ್ರಪ್ಪ ಹಾಗೂ ಡಾ.ಗೋಪಾಲಕೃಷ್ಣ ಅಡಿಗ ಅವರು ಫೆಬ್ರವರಿ ತಿಂಗಳಿನಲ್ಲಿ ಜನಿಸಿದ್ದರು. ಅವರ ನೆನಪಿನಲ್ಲಿ ಈ ಸಾಕ್ಷ್ಯ ಚಿತ್ರಗಳನ್ನು ಪ್ರದರ್ಶಿಸಲಾಯಿತು.

## ಅಕ್ಕರಗೊಟ್ಟಿ (ತಿಂಗಳ ಮುಕ್ತ ಸಾಂಸ್ಕೃತಿಕ ಚಿಂತನೆ)

15-02-2017

ಚಾಲನೆ : ಡಾ. ಪ್ರಮೀಳಾ ಮಾಧವ್



ನಿವೃತ್ತ ಕನ್ನಡ ಪ್ರಾಧ್ಯಾಪಕರು, ಸುಪ್ರಸಿದ್ಧ ವಿಮರ್ಶಕರು

ವಿಷಯ - 'ಪದ್ಯಂ ವಧ್ಯಂ, ಗದ್ಯಂ ಹೃದ್ಯಂ'

ಕವಿ ಮುದ್ದಣ ಹಾಗೂ ಆತನ ಕೃತಿಗಳ ಕಿರುಪರಿಚಯವನ್ನು ಮಾಡಿದ ಡಾ. ಪ್ರಮೀಳಾ ಮಾಧವ್ ಅವರು ಪ್ರಕೃತ ಸೂಕ್ತಿಯ ಪಾಠದ ಬಗ್ಗೆ ತಮ್ಮ ಜಿಜ್ಞಾಸೆಯನ್ನು ವ್ಯಕ್ತಪಡಿಸಿ ಕಾವ್ಯದ ಬಾಹ್ಯ ಹಾಗೂ ಅಂತರಂಗದ ಅನೇಕ ಸಾಕ್ಷ್ಯಾಧಾರಗಳ ಮೂಲಕ 'ಪದ್ಯಂ ವದ್ಯಂ ಗದ್ಯಂ ಹೃದ್ಯಂ' ಎನ್ನುವುದು ಕವಿ ಮುದ್ದಣನ ಇಂಗಿತ ಮತ್ತು ಮೂಲಪಾಠವಿರಬೇಕೆಂಬ ಅಭಿಪ್ರಾಯವನ್ನು ಮಂಡಿಸಿ ಚರ್ಚೆಗೆ ಚಾಲನೆ ನೀಡಿದರು. ಅನೇಕ ಸಾಹಿತ್ಯಾಭಿಮಾನಿಗಳು ಮತ್ತು ವಿದ್ವಾಂಸರು ಚರ್ಚೆಯಲ್ಲಿ ಭಾಗವಹಿಸಿದರು.

ಡಾ. ಪಿ. ವಿ. ನಾರಾಯಣಅವರು ಮತ್ತು ಪ್ರೊ. ಜಿ. ಅಶ್ವತ್ಥ ನಾರಾಯಣಅವರು ಡಾ. ಪ್ರಮೀಳಾ ಮಾಧವ್ ಅವರು ಪ್ರಸ್ತುತಪಡಿಸಿದ ವಿಚಾರಕ್ಕೆ ಸಕಾರಾತ್ಮಕವಾಗಿ ಸ್ಪಂದಿಸಿ ಇನ್ನಷ್ಟು ಪೂರಕ ಮಾಹಿತಿಗಳನ್ನು ನೀಡಿದರು. ಶ್ರೀಯುತ ವಿಜಯೇಂದ್ರ ಅವರು ಪ್ರಸಕ್ತ ಸೂಕ್ತಿ ಮನೋರಮೆಯು ಕೀಟಲೆಯ ಸ್ವಭಾವಕ್ಕೆ ಅನುಗುಣವಾಗುವ ಸಾಂದರ್ಭಿಕ ಪ್ರತಿಕ್ರಿಯೆಯಾಗಿರಬೇಕೆನ್ನುತ್ತ 'ಪದ್ಯಂ ವಧ್ಯಂ..'ಎಂಬ ಪಾಠವನ್ನು ಯಥಾವತ್ತಾಗಿ ಒಪ್ಪಿಕೊಳ್ಳಬಹುದೆಂದು ತಿಳಿಸಿ ವಿಷಯಕ್ಕೆ ಹೊಸಬಗೆಯ ಬೆಳಕನ್ನು ಚೆಲ್ಲಿದರು.ಶ್ರೀ ಡಿ. ನಂ.ವೆಂಕಟರಮಣಯ್ಯ, ಪ್ರೊ. ಅಬ್ದುಲ್ ಬಶೀರ್, ಶ್ರೀ ಸಂತೋಷ್, ಡಾ.ಎಸ್. ಅನಿಲ್ ಕುಮಾರ್, ಶ್ರೀ ಶ್ರೀಧರ ಕುಂಜತ್ತೂರು ಮತ್ತಿತರರು ಚರ್ಚೆಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಕಾರ್ಯಕ್ರಮವನ್ನು ತುಂಬ ಅರ್ಥಪೂರ್ಣವಾಗಿ ನಡೆಸಿಕೊಟ್ಟರು.

ಪ್ರಾರಂಭದಲ್ಲಿ ಡಾ. ಪಿ.ವಿ. ನಾರಾಯಣ ಅವರು ಎಲ್ಲರನ್ನೂ ಸ್ವಾಗತಿಸಿದರು.ಪ್ರೊ.ಅಬ್ದುಲ್ ಬಶೀರ್ ಅವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

ಈ ಕುರಿತು ನಡೆದ ಅರ್ಥಪೂರ್ಣ ಚರ್ಚೆಯಲ್ಲಿ ಡಾ. ಪಿ.ವಿ. ನಾರಾಯಣ, ಪ್ರೊ.ಅಶ್ವತ್ಥನಾರಾಯಣ, ಪ್ರೊ.ಶ್ರೀಪಾದ ಭಟ್, ಪ್ರೊ.ಅಬ್ದುಲ್ ಬಶೀರ್, ಶ್ರೀ ಸುಬ್ರಮಣ್ಯ, ಶ್ರೀರಾಮಮೂರ್ತಿ, ಡಾ|| ಲಕ್ಷ್ಮೀನಾರಾಯಣ, ಡಾ|| ಎಂ.ಜಿ.ನಾಗರಾಜ್, ಪ್ರೊ ಶೇಷಗಿರಿರಾವ್, ಶ್ರೀ ರವೀಂದ್ರನಾಥ್, ಶ್ರೀ ವೆಂಕಟರಮಣಯ್ಯ, ಶ್ರೀಮತಿ ನಳಿನಿ ವೆಂಕಟೇಶ, ಶ್ರೀಮತಿ ಭಾರತಿ ಮುಂತಾದವರು ಭಾಗವಹಿಸಿದ್ದರು.

## ಶ್ರೀ. ಸಿ.ಆರ್. ಶ್ರೀಧರ್

ಒಂದು ಪರಿಚಯ



ಶ್ರೀ.ಸಿ.ಆರ್. ಶ್ರೀಧರ್ ಅವರು ವೃತ್ತಿಯಿಂದ ಬ್ಯಾಂಕರ್. ಆದರೆ ಪ್ರವೃತ್ತಿಯಿಂದ ಜನರ ಮುಖದಲ್ಲಿ ಮಂದಹಾಸ ಮೂಡಿಸುವ ಶ್ರೇಷ್ಠ ವ್ಯಂಗ್ಯ ಚಿತ್ರಕಾರ .ಅವರು ಭಾರತೀಯ ಸ್ಟೇಟ್ ಬ್ಯಾಂಕಿನಲ್ಲಿ ಸುಧೀರ್ಘ ಸೇವೆ ಸಲ್ಲಿಸಿ ಸ್ವಯಂ ನಿವೃತ್ತಿ ತೆಗೆದುಕೊಂಡ ನಂತರ ಸ್ವಸಂತೋಷಕ್ಕಾಗಿ ಮೇ 2011ರಲ್ಲಿ ಬರೆದ ತಮ್ಮ ಮೊದಲ ಕಾರ್ಟೂನ್ ಅನ್ನು ಫೇಸ್ ಬುಕ್ನಲ್ಲಿ ಹಾಕಿದರು. ಅದಕ್ಕೆ ಸಿಕ್ಕ ಉತ್ತಮ ಪ್ರಶಂಸೆ ಅವರನ್ನು ಕಾರ್ಟೂನ್ ಪ್ರಪಂಚಕ್ಕೆ ಎಳೆದು ತಂದಿತು.ಅಂದಿನಿಂದ ಹೆಚ್ಚು ಕಡಿಮೆ ಪ್ರತಿ ದಿವಸ ತಪ್ಪದೆ ಒಂದು ಕಾರ್ಟೂನ್ ಮತ್ತು ಕ್ಯಾರಿಕೇಚರ್ ಅನ್ನು ಪ್ರಕಟಿಸುತ್ತಾ ಬಂದಿದ್ದಾರೆ.

ಒಬ್ಬ ಉತ್ತಮ ವ್ಯಂಗ್ಯ ಚಿತ್ರಕಾರನಿಗೆ ಬೇಕಾದ, ವ್ಯಕ್ತಿಗಳ ಗುಣಾವಗುಣಗಳ ಸೂಕ್ಷ್ಮ ಅವಲೋಕನ, ವ್ಯಕ್ತಿಗಳ ರೂಪ ರೇಷೆಗಳನ್ನು ತಕ್ಷಣ ತಮ್ಮ ಪೆನ್ನಿನ್ನಲ್ಲಿ ಸೆರೆಹಿಡಿಯುವ ಚತುರತೆ, ಸಂದರ್ಭಕ್ಕೆ ತಕ್ಕಂತೆ ಚುಟುಕು ಮಾತಿನ ಚಟಾಕಿ ಬರೆವ ಕಲಾ ಪ್ರತಿಭೆ ಶ್ರೀ.ಶ್ರೀಧರ್ ಅವರಲ್ಲಿ ಎದ್ದು ಕಾಣುತ್ತದೆ. ಕಪ್ಪು ಬಿಳಿಪು ಹಾಗೂ ವರ್ಣಗಳಲ್ಲಿ ರಚಿಸುವ ಅವರ ಚಿತ್ರಗಳು ತಮ್ಮದೇ ಆದ ಛಾಪ ಹೊಂದಿವೆ.

ಶ್ರೀ.ಶ್ರೀಧರ್ ಅವರು ತಮ್ಮ ರೇಖಾ ಚಿತ್ರಗಳಿಂದ ಹಲವಾರು ಪುಸ್ತಕಗಳನ್ನು ಆಕರ್ಷಕ ಮಾಡಿದ್ದಾರೆ. Citizen Matter ಅವರು ಶ್ರೀಧರ್ ಅವರ ಹಲವಾರು ವ್ಯಂಗ್ಯ ಚಿತ್ರಗಳನ್ನು ತಮ್ಮ ಹಿಂದಿನ ಪ್ರಕಟನೆಗಳಲ್ಲಿ ಪ್ರಕಟಿಸಿದ್ದಾರೆ. ಇತ್ತೀಚೆಗೆ ಶ್ರೀ.ಕೆ.ಎನ್. ಮಹಾಬಲ ಅವರ "ಹಾಸ್ಯ ಬಂಧ" ಪುಸ್ತಕಕ್ಕೂ ವ್ಯಂಗ್ಯ ಚಿತ್ರಗಳನ್ನು ಬರೆದಿದ್ದಾರೆ.

ಚಿತ್ರಕಲಾ ಪರಿಷತ್ ನಡೆಸುವ ಜನಪ್ರಿಯ ಕಲಾಮೇಳ "ಚಿತ್ರ ಸಂತೆಯಲ್ಲಿ" 2014ರಲ್ಲಿ ಭಾಗವಹಿಸಿ, ತಮ್ಮ ವಿಶಿಷ್ಟ ಕಲಾ ಪ್ರಕಾರಕ್ಕೆ ಬಂದ ಸಹಸ್ರಾರು ಜನರ ಮೆಚ್ಚಿಗೆ ಪಡೆದಿದ್ದಾರೆ. ಬೆಂಗಳೂರಿನಲ್ಲಿ ಹಲವಾರು ಕಡೆ ವ್ಯಂಗ್ಯಚಿತ್ರ ಬಿಡಿಸುವ ಕಾರ್ಯಾಗಾರಗಳನ್ನು ನಡೆಸಿಕೊಟ್ಟಿದ್ದಾರೆ. ಸಾಮಾನ್ಯ ಜನರನ್ನು ವಿಶೇಷವಾಗಿ ಆಕರ್ಷಿಸುವ ಅವರ ಒಂದು ಪ್ರಯೋಗ - ಯಾರೇ ಬರೆದ ರೇಖೆಗಳಿಂದ ಒಂದು ನಿಮಿಷದಲ್ಲಿ ಒಂದು ಚಿತ್ತಾಕರ್ಷಕ, ಅರ್ಥಪೂರ್ಣ ವ್ಯಂಗ್ಯ ಚಿತ್ರವನ್ನು ಅನ್ನು ಬಿಡಿಸುವುದು. ಆ ಸಂದರ್ಭಗಳಲ್ಲಿ ಮಕ್ಕಳಂತೂ ಇವರನ್ನು ಸಕ್ಕರೆಗೆ ಇರುವೆ ಮುತ್ತುವಂತೆ ಮುತ್ತುತ್ತಾರೆ.

ವ್ಯಂಗ್ಯಚಿತ್ರ ಕಲಾವಿದರಾದ ಈ ಕಲಾಪ್ರಿಯ ಇತ್ತೀಚೆಗೆ ಕರ್ನಾಟಕ ವ್ಯಂಗ್ಯ ಚಿತ್ರಕಾರರ ಸಂಘ ದ (Karnataka Cartoonists Association ) ಕೋಶಾಧಿಕಾರಿಯಾಗಿ ಚುನಾಯಿಸಲ್ಪಟ್ಟಿದ್ದಾರೆ.

ಶ್ರೀ ಶ್ರೀಧರ್ ಅವರ ಎಲ್ಲ ಚಿತ್ರಗಳನ್ನು ಅವರ Face Book site - SRI's world ನಲ್ಲಿ ನೋಡಬಹುದು.

ಶ್ರೀ ಶ್ರೀಧರ್ ಅವರ ದೂರವಾಣಿ ಸಂಖ್ಯೆ: 9980222340

# ಪದಚರಿತೆ

## ಒಂದಷ್ಟು ಪದಗಳ ಮೂಲಚೂಲಗಳ ಹುಡುಕಾಟ

–ಡಾ.ಪಿ.ವಿ. ನಾರಾಯಣ

**ಕೂಡಲಸಂಗಮದೇವ:** ಎಲ್ಲರಿಗೂ ಪರಿಚಿತವಾದ ಶಬ್ದವಿದು. ಬಸವಣ್ಣನ ವಚನಗಳ ಅಂಕಿತ ಅಥವಾ ಮುದ್ರಿಕೆ. ಇದರಲ್ಲಿ ಮೂರು ಭಾಗಗಳಿವೆ: ಕೂಡಲ್, ಸಂಗಮ ಹಾಗೂ ದೇವ. ಕೂಡಲ್ ಅಥವಾ ಕೂಡಲು ಎಂಬುದು ಕನ್ನಡ ಶಬ್ದ; ಉಳಿದೆರಡು ಸಂಸ್ಕೃತ ಶಬ್ದಗಳು. ಕೂಡಲ್ ಎಂಬುದಕ್ಕೆ ಷಷ್ಠೀವಿಭಕ್ತಿ ಪ್ರತ್ಯಯ ಸೇರಿಸಿದಾಗ ಆಗುವ ಕೂಡಲ ಅಥವಾ ಕೂಡಲಿನ ಸಂಗಮದೇವ ಎಂದೂ ಅರ್ಥವಾಗವಾಗಬಹುದು, ಕೂಡಲಸಂಗಮದ ಅಧಿದೈವ ಎಂದೂ ಅರ್ಥವಾಗಬಹುದು.ಕೂಡು ಎಂದರೆ ಎಂದರೆ ಸೇರುವಿಕೆ, ಸಂಗಮ ಎಂದರೂ ಸೇರುವಿಕೆ; ಸಾಮಾನ್ಯವಾಗಿ ಎರಡು ಅಥವಾ ಹೆಚ್ಚಿನ ನದಿಗಳ ಸೇರುವಿಕೆಯನ್ನು ಕೂಡಲು ಎನ್ನುತ್ತಾರೆ. ಕೂಡಲಿ, ಕೂಡಲು ಕೂಡಲೂರ್ ಎಂಬ ಊರುಗಳಿವೆ. ಕೂಡುವುದರ ಭಾವವೇ ಕೂಟ.ಅನೇಕರು ಸೇರುವ ಸಂಸ್ಥೆ ಎಂಬ ಹೆಸರಿನಲ್ಲಿಯೂ ಈ ಶಬ್ದದ ಬಳಕೆಯಿದೆ.

ಬಾಗಲಕೋಟೆ ಜಿಲ್ಲೆಯಲ್ಲಿ ಕೃಷ್ಣ ಮತ್ತು ಮಲಪ್ರಭಾ ನದಿಗಳು ಸೇರುವ ಬಹು ಪ್ರಸಿದ್ಧ ಕ್ಷೇತ್ರವನ್ನು ಕೂಡಲಸಂಗಮ ಎಂದು ಕರೆಯುತ್ತಾರೆ.ಬಸವಣ್ಣನ ಆರಾಧ್ಯದೈವ ಅಲ್ಲಿಯ ಕೂಡಲಸಂಗಮೇಶ್ವರ, ಹಾಗಾಗಿ ತನ್ನ ವಚನಗಳ ಮುದ್ರಿಕೆಯನ್ನಾಗಿ ಆ ಶಬ್ದವನ್ನೇ ಬಳಸುತ್ತಾನೆ. ಈ ಕ್ಷೇತ್ರಕ್ಕೆ ಕಪ್ಪಡಿ ಸಂಗಮ ಎಂದೂ ಕರೆಯುತ್ತಿದ್ದರು. ತನ್ನ ಹುಟ್ಟೂರಾದ ಇಂಗುಳೇಶ್ವರ ಬಾಗೇವಾಡಿಯಿಂದ ಬಂದ ಬಸವಣ್ಣನ ಪ್ರಸಂಗವನ್ನು ಹೇಳುವಾಗ ಹರಿಹರಕವಿಯು ತನ್ನ 'ಬಸವರಾಜದೇವರರಗಳೆ'ಯಲ್ಲಿ "ಮಲಪ್ರಹರಿ ಕೃಷ್ಣವೇಣಿಗಳ ಸಂಗಸುಖಮಂ ಪಿಂಗದ ಕೂಡಲಸಂಗಮೇಶ್ವರನಿಪ್ಪ ಕಪ್ಪಡಿಯ ಸಂಗಮಮಂ ಪೊಕ್ಕು" ಎಂದು ವರ್ಣಿಸುತ್ತಾನೆ. ಕಪ್ಪಡಿ ಎನ್ನುವುದು ಸಂಸ್ಕೃತದ 'ಕರ್ಪಟಿನ್' ಎಂಬ ಶಬ್ದದ ತದ್ಭವ (ತದ್ಭವವೆಂದರೆ ಕನ್ನಡೀಕರಣಗೊಂಡ ಸಂಸ್ಕೃತ ಶಬ್ದ ಎಂದರ್ಥ); ಕರ್ಪಟ ಅಥವಾ ಹರಕಲು ಬಟ್ಟೆ ತೊಟ್ಟವನು ಕರ್ಪಟಿನ್; ಹಾಗಿರುವವನು ಸಾಧಕ. ಕೂಡಲ ಸಂಗಮವು ಹಿಂದಿನಿಂದಲೂ ಸಾಧಕರ ಕ್ಷೇತ್ರವಾಗಿತ್ತು; ಸಾಧಕರು ದೂರದೆಡೆಗಳಿಂದ ಇಲ್ಲಿಗೆ ಬಂದು ತಮ್ಮ ಆಧ್ಯಾತ್ಮಿಕ ಸಾಧನೆಗಳಲ್ಲಿ ತೊಡಗಿರುತ್ತಿದ್ದರು.ಅದಕ್ಕೇ ಈ ಜಾಗಕ್ಕೆ ಈ ಹೆಸರಾಯಿತು.

ಮೈಸೂರು ಜಿಲ್ಲೆಯಲ್ಲಿ ತಿರುಮಕೂಡಲು ನರಸೀಪುರ ಎಂಬ ಊರಿದೆ.ಈ ಎರಡು ಹೆಸರುಗಳಲ್ಲಿ ಮೊದಲನೆಯದು ತಿರು+ಮುಕ್ಕೂಡಲು ಸೇರಿ ಆದುದು.ತಿರು ಎಂಬುದು ಶ್ರೀ ಎಂಬುದರ ತದ್ಭವರೂಪ, ಶ್ರೇಷ್ಠವಾದ, ಪವಿತ್ರವಾದ ಎಂಬ ಅರ್ಥ ಹೊಂದಿದೆ. ಅಂತಹ ಮುಕ್ಕೂಡಲು ಅದು; ಅಲ್ಲಿ ಸೇರುವುದು ಕಾವೇರಿ ಮತ್ತು ಕಪಿಲಾ ನದಿಗಳೂ, ಜೊತೆಗೆ ಅಂತರ್ವಾಹಿನಿಯೊಂದೂ ಹರಿಯುತ್ತದೆ [ಪ್ರಯಾಗದಲ್ಲಿ ಗಂಗಾ ಯಮುನೆಯರ ಜೊತೆ ಸರಸ್ವತಿ ಅಂತರ್ಗಾಮಿಯಾಗಿ ಹರಿಯುತ್ತದೆ ಎಂಬಂತೆ] ಎಂದು ನಂಬಿಕೆ. ಹೀಗಾಗಿ ಅದು ಮೂರು ನದಿಗಳ ಸಂಗಮ; ಇದೇ ಮುಕ್ಕೂಡಲ್ (ಮೂರ್+ಕೂಡಲ್).

=====

**ಕೂದಲು:** ಕೇಶ ಎಂಬರ್ಥದ ಈ ಶಬ್ದದ ಹಳಗನ್ನಡ ರೂಪ 'ಕೂಂದಲ್' ಎಂದು. ತಮಿಳು ಮಲಯಾಳಂಗಳಲ್ಲಿದು 'ಕೂಂತಲ್' ಎಂಬ ರೂಪದಲ್ಲಿಯೂ ತುಳುವಿನಲ್ಲಿ 'ಕುಜಲ್' ಎಂಬ ರೂಪದಲ್ಲಿಯೂ ಸಿಕ್ಕುತ್ತದೆ. (ತೆಲುಗಿನಲ್ಲಿ ವೆಂಡ್ರುಕ ಎಂಬುದು ಮೂಲ ಗ್ರಾಂಥಿಕ ರೂಪವಾಗಿದ್ದರೂ ಆಡುಮಾತಿನಲ್ಲದು 'ಎಂಟಿಕಲು' ಎಂದಾಗುತ್ತದೆ). ಇದು ಸಂಸ್ಕೃತದ 'ಕುಂತಲ' ಶಬ್ದದ ರೂಪಾಂತರವೆಂದು ಹೇಳುವುದುಂಟು. (ಕುಂತಲ ಶಬ್ದವೂ ಹಳಗನ್ನಡದಲ್ಲಿ ವ್ಯಾಪಕವಾಗಿ ಬಳಕೆಯಲ್ಲಿತ್ತು). ಹಳಗನ್ನಡದಲ್ಲಿ 'ಕೂಂದಲ್' ಮತ್ತು 'ಕೂದಲು' ಎರಡು ರೂಪಗಳೂ ದೊರೆಯುತ್ತವೆ. "ಸೋಗೆ ಕೂಂದಲ್ವೊಜ಼ಿಯಂ ಕಾಳೋರಗಂಗೆತ್ತು ಎಳಸಿದಪುದು" ಎಂಬುದು ನೇಮಿಚಂದ್ರನ 'ಲೀಲಾವತಿ'ಯ ವರ್ಣನೆ. ಹನ್ನೊಂದನೆಯ ಶತಮಾನದ ಚಾವುಂಡರಾಯನ 'ಲೋಕೋಪಕಾರ'ದಲ್ಲಿ "ಬೆಲ್ಲದ ನೀರಾದೊಡಂ ಬೆಲ್ಲವತ್ತದ ಕಾಯ ತಿರುಳಾದೊಡಂ ತಲೆಯಂ ಪೂಸಲ್ ಜಡೆಗೊಂಡ ಕೂಂದಲ್ ಮಾಣ್ದು ಚೆನ್ನಪ್ಪುದು" ಎಂದು ಒಂದು ಪದ್ಯಕ್ಕೆ ಟೀಕೆಯಿದೆ (ಈ ಟೀಕೆಯನ್ನು ಕೃತಿಕಾರನೇ ಬರೆದನೋ, ಅಥವಾ ಬೇರೆ ಯಾರು, ಯಾವಾಗ ಬರೆದರೋ ತಿಳಿಯದು). "ತಲೆಯಲಿ ಕರಿದು ಕೂಂದಲುಗಳೌಷಧಿಗಿಲ್ಲ" ಎಂಬುದು ಕನಕದಾಸನ 'ಮೋಹನತರಂಗಿಣಿ' ಕಾವ್ಯದ ಮಾತು."ಮೂದಲೆಯ ಮಾತು ಕೂದಲ ಕೀಲಿನಂತಲ್ಲದರಿಯಬಾರದು" ಎಂಬುದು ಚಂದಿಮರಸ ಎಂಬೊಬ್ಬ ವಚನಕಾರನ ಮಾತು.ಇಲ್ಲಿನ 'ಕೂದಲ ಕೀಲು' ಪ್ರಾಯಶಃ ಕೂದಲಿನ ಬುಡವನ್ನು ಸೂಚಿಸುತ್ತದೆ."ನವಿರೆಂದು ಕೂದಲು" ಎಂದು 'ಶಬ್ದಮಣಿದರ್ಪಣ'ದಲ್ಲಿ ಅರ್ಥ ಹೇಳಿದೆ. "ತುಱುಕಱು ಕೂದಲು ತುಱುಬಿಗೆ ಸುತ್ತಿದರೆ ಎಣಿಕೆಯಿಲ್ಲದ ಮುತ್ತೈದೆಯರಣ್ಣ" ಎಂಬುದು ಪುರಂದರದಾಸನ ಮಾತು.

ಕುಮಾರವ್ಯಾಸ 'ಕೂದಲು ಹಜ಼ಿ' ಎಂಬುದನ್ನು ಒಂದು ನುಡಿಗಟ್ಟಾಗಿ ಬಳಸುತ್ತಾನೆ: "ಬಿಸುಡು ಚಕ್ರವನೆನ್ನ ಕಾಯದಲಿ ಅಳುಕಿ ಕೂದಲು ಹಜ಼ಿದುದಾದರೆ ಬಳಿಕ ನಾ ಡಿಂಗರಿಗನಲ್ಲ" ಎಂಬಲ್ಲಿ ಈ ನುಡಿಗಟ್ಟಿಗೆ ಈಗಿನ 'ಕೂದಲೂ ಕೊಂಕಲಾರದು' ಎಂಬರ್ಥವಿದೆ. ನಾವೀಗ ಕೂದಲು ಶಬ್ದವನ್ನೊಳಗೊಂಡ ಇನ್ನೂ ಅನೇಕ ನುಡಗಟ್ಟುಗಳನ್ನು ಬಳಸುತ್ತೇವೆ. 'ಕೂದಲೆಳೆಯಷ್ಟು' ಎಂದರೆ ತೀರ ಕಡಿಮೆ ಅಂತರ ಎಂಬರ್ಥವಿದ್ದರೆ, ಕೃತ್ರಿಮ ನಯಗಾರಿಕೆಯಿಂದ ಮಾತನಾಡುವುದನ್ನು 'ಬೆಣ್ಣೆಯೊಳಗೆ ಕೂದಲು ತೆಗೆದಂತೆ' ಎಂದು ಹೇಳುವುದು ವಾಡಿಕೆ. ●

## ಪ್ರಕಟಣೆ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನವು ವಾರ್ಷಿಕವಾಗಿ ನೀಡುವ ಸೂ.ವೆಂ.ಆರಗ ವಿಮರ್ಶಾ ಪ್ರಶಸ್ತಿಗಾಗಿ ವಿಮರ್ಶಾ ಕೃತಿಗಳನ್ನು ಆಹ್ವಾನಿಸಿದೆ. ಹತ್ತು ಸಾವಿರ ರೂಪಾಯಿ ನಗದು ಹಾಗೂ ಸ್ಮರಣಿಕೆಗಳನ್ನು ಒಳಗೊಂಡಿರುವ ಈ ಪ್ರಶಸ್ತಿಯನ್ನು 2016ನೆಯ ಸಾಲಿನಲ್ಲಿ (ಜನವರಿ–ಡಿಸೆಂಬರ್ ಅವಧಿ) ಮೊದಲ ಆವೃತ್ತಿಯಾಗಿ ಪ್ರಕಟವಾಗಿರುವ ಕನ್ನಡದ ಶ್ರೇಷ್ಠ ವಿಮರ್ಶಾಕೃತಿಯೊಂದಕ್ಕೆ ನೀಡಲಾಗುವುದು. ಲೇಖಕರು, ಪ್ರಕಾಶಕರು ಹಾಗೂ ಇತರರು 2016ರಲ್ಲಿ ಪ್ರಕಟವಾಗಿರುವ ಕನ್ನಡ ವಿಮರ್ಶಾಕೃತಿಯ ಎರಡು ಪ್ರತಿಗಳ ಜೊತೆ ಖಾಲಿ ಹಾಳೆಯಲ್ಲಿ ವಿಳಾಸ ಮತ್ತು ಮೊಬೈಲ್ ನಂ. ನಮೂದಿಸಿ ಸಲ್ಲಿಸಬೇಕು.ಕೃತಿಗಳನ್ನು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನಕ್ಕೆ ದಿನಾಂಕ : 15–3–2017 ರ ಒಳಗೆ ಕಳುಹಿಸಬೇಕು.

# ತಿಗಳಾರಿ ಲಿಪಿ ಆನ್‌ಲೈನ್ ಅಧ್ಯಯನ

ಹಸ್ತಪ್ರತಿ ಆನ್ ಲೈನ್ ಅಧ್ಯಯನದ ತರಗತಿಗಳು ಪ್ರಾರಂಭವಾಗಿವೆ. 20 ಜನ ಭಾಗವಹಿಸಿದ್ದಾರೆ.ನೊಂದಣಿಯು ಪ್ರಾರಂಭವಾಗಿದೆ, ಈಗಾಗಲೇ ಆನ್ ಲೈನ್‌ನಲ್ಲಿ ತಾಳೆಗರಿ ಪಡೆದು ಲಿಪ್ಯಾಂತರ ಮಾಡುವ ಕಾರ್ಯವು ಮೊದಲಾಗಿದೆ.

ತಿಗಳಾರಿ ಲಿಪಿಯು ಕರಾವಳಿ ಮತ್ತು ಮಲೆನಾಡಿನ ಭಾಗದಲ್ಲಿ ಶತಮಾನಗಳ ಹಿಂದೆ ಸಂಸ್ಕೃತ ಮತ್ತು ಕೆಲ ಮಟ್ಟಿಗೆ ತುಳು ಭಾಷೆಯನ್ನು ಬರೆಯಲು ಬಳಸಲಾಗುತಿದ್ದ ಬರಹ. ಇದು ಒಂದು ರೀತಿಯಲ್ಲಿ ಗೂಢವಾದ ಲಿಪಿ.ಬಹುತೇಕ ಸಂಸ್ಕೃತ ವಿದ್ವಾಂಸರು ತಮ್ಮ ಮಂತ್ರ, ತಂತ್ರ ಹಾಗೂ ಸಾಹಿತ್ಯಗಳು ಅನೇಕರಿಗೆ ಅರ್ಥವಾಗಬಾರದೆಂದು ರಹಸ್ಯವಾಗಿರಿಸಬೇಕೆಂದು ಈ ಲಿಪಿ ಬಳಸಿದರೆಂದು ಹೇಳಲಾಗುವುದು.ಬಹುತೇಕ ಕೃತಿಗಳು ಮಠ, ದೇವಸ್ಥಾನ ಹಾಗೂ ಸಂಸ್ಥಾನಗಳಲ್ಲಿ ಇವೆ. ಈಗ ಅವುಗಳನ್ನು ಓದುವವರ ಸಂಖ್ಯೆಯೇ ವಿರಳವಾಗಿದೆ.ಬೆರಳೆಣಿಕೆಯಷ್ಟು ಜನರು ತಿಗಳಾರಿಯನ್ನುಅರ್ಥೈಸಬಲ್ಲರು.ಸುಮಾರು ಐದು ಸಾವಿರ ಕೃತಿಗಳು ಇವೆ. ಕೆಲವೇ ವರ್ಷಗಳಲ್ಲಿ ಅವು ಇದ್ದೂ ಇಲ್ಲದಾಗಬಹುದು.ಆದ್ದರಿಂದ ನಮ್ಮ ಪುರಾತನ ಸಾಹಿತ್ಯ, ಸಂಸ್ಕೃತಿ ಮತ್ತು ಜ್ಞಾನವನ್ನು ಉಳಿಸಿಕೊಳ್ಳಲು ತಿಗಳಾರಿ ಬಲ್ಲಯುವ ಪಡೆಯನ್ನು ರೂಪಿಸವುದು ಅಗತ್ಯ.ಈ ದಿಶೆಯಲ್ಲಿ ಬಿ.ಎಂ.ಶ್ರೀ ಪ್ರತಿಷ್ಠಾನದ ಹಸ್ತಪ್ರತಿವಿಭಾಗವು ಆನ್‌ಲೈನ್‌ನಲ್ಲಿ ಕಲಿಸುವ ಯೋಜನೆ ರೂಪಿಸಿದೆ.ಸಂಸ್ಕೃತ ಬಲ್ಲ ಮತ್ತು ತಂತ್ರಜ್ಞಾನದಲ್ಲಿ ನುರಿತವರಿದ್ದರೆ ಕಲಿಕೆಗೆ ಅನುಕೂಲ.

ಅದೃಷ್ಟವಶಾತ್ ಸಂಸ್ಕೃತ ವಿಶ್ವವಿದ್ಯಾಯದ ಎಂ ಫಿಲ್ ಮತ್ತು ಪಿಎಚ್‌ಡಿ ವಿದ್ಯಾರ್ಥಿಗಳು ಭಾಗವಹಿಸಲು ಆಸಕ್ತರಾಗಿದ್ದಾರೆ. ಪ್ರತಿಷ್ಠಾನದಲ್ಲಿನ ಗಣಕೀಕೃತ ತಿಗಳಾರಿ ಕೃತಿಗಳು ಬಹಳ ಉಪಯೋಗವಾಗಿವೆ. ಎಲ್ಲ ಕಲಿಕೆಯೂ ಅಂತರ್ಜಾಲದ ಮೂಲಕವೇ ಆಗುವುದು ಆಧುನಿಕ. ತಂತ್ರಜ್ಞಾನದ ಸಹಾಯದಿಂದ ಈ ಆರ್ವಾಚೀನ ಲಿಪಿಯನ್ನು ಉಳಿಸುವ ಈ ಪ್ರಯತ್ನ ದೇಶದಲ್ಲಿಯೇ ಮೊದಲನೆಯದು ಎನ್ನಬಹುದು. ಇದರ ಯಶಸ್ಸು ಅಭ್ಯರ್ಥಿಗಳ ಆಸಕ್ತಿಯನ್ನಯ ಅವಲಂಬಿಸಿದೆ. . ಈ ವಿನೂತನ ಪ್ರಯತ್ನಕ್ಕೆ ಎಲ್ಲ ಆಸಕ್ತರ ಬೆಂಬಲ ಬೇಕಿದೆ.

ತಿಗಳಾರಿ ಲಿಪಿ ಕಲಿಕೆಗೆ ಅರ್ಹತೆ

*ಸಾಹಿತ್ಯ ಸಂಸ್ಕೃತಿ ಮತ್ತು ಸಂಸ್ಕೃತದಲ್ಲಿ ಆಸಕ್ತಿ ಇರಬೇಕು

* ತಂತ್ರಜ್ಞಾನದ ತಿಳುವಳಿಕೆ ಅಗತ್ಯ

* ಸಂಸ್ಕೃತ ಜ್ಞಾನವಿದ್ದರೆ ಉತ್ತಮ

ಬೋಧನಾ ಶುಲ್ಕ ಸದ್ಯಕ್ಕೆ ಉಚಿತ.( ನಿರ್ವಹಣಾ ವೆಚ್ಚ ಭರಿಸಬೇಕಾಗಬಹದು)

ಕಲಿಕಾ ಅವಧಿ ಸುಮಾರು ಆರುತಿಂಗಳು.

ತಿಗಳಾರಿ ಲಿಪಿ ಕಲಿತರೆ ಆ ಲಿಪಿಯಲ್ಲಿರುವ ಸುಮಾರು ಐದು ಸಾವಿರ ಕೃತಿಗಳ ಜ್ಞಾನದ ಅನಾವರಣ ಮಾಡಬಹುದು.

ವಿದ್ವಾಂಸರು, ಸಂಶೋಧಕರು ತಮಗೆ ಬೇಕಾದ ಮಾಹಿತಿಯನ್ನು ಮೂಲದಲ್ಲೇ ಪಡೆಯಬಹುದು.

ತಿಗಳಾರಿ ಕೃತಿಗಳನ್ನುಲಿಪ್ಯಾಂತರಿಸಿ ಪ್ರಕಟಿಸಲು ಸರ್ಕಾರದ ನೆರವು ಸಿಗುವುದು.

ಖಾಸಗಿ ವ್ಯಕ್ತಿಗಳು, ಸಂಸ್ಥೆಗಳು ಮತ್ತು ಸಂಶೋಧಕರು ತಮ್ಮಲ್ಲಿರುವ ತಿಗಳಾರಿ ಕೃತಿಗಳಲ್ಲಿರುವ ಮಾಹಿತಿ ಅರಿಯಲು ಲಿಪ್ಯಾಂತರಿಸಲು ಹಣ ಕೊಡಬಹುದು.

ಎಲ್ಲಕ್ಕಿಂತ ಅಜ್ಞಾತವಾಗಿ ಕಣ್ಮರೆಯಾಗಬಹುದಾದ ಲಿಪಿಯನ್ನು ಉಳಿಸುವ ಸಾರ್ಥಕ ಕಾರ್ಯದಲ್ಲಿ ಭಾಗಿಯಾಗುವ ಸಂತೃಪ್ತಿ ನಮ್ಮದಾಗುವುದು.

ಆಸಕ್ತರು ಸಂಯೋಜಕರನ್ನು ಸಂಪರ್ಕಿಸಬಹುದು. hastaprati2@gmail.com ಅಥವಾ 9448442323 ಈ ನಂಬರ್ ಗೆ ಸಂಪರ್ಕಿಸಿ.

## FORM IV

(See Rule-8)

Statement about ownership and other particulars about Newspaper "HONGANASU Kannada Monthly" Bangalore. As required under Rules 8 of the Registration A Newspapers (Central) Rules 1956.

| | | | |
|---|---|---|---|
| 1. | Place of Publication | — | Bangalore |
| 2. | Periodicity of publication | — | Monthly |
| 3. | Printer's Name | — | Sri. B.R. Ravindranath |
| | Whether Citizen of India | — | Yes |
| | Address | — | BMSree Smaraka Pratishtana, 3rd Main, NR Colony, Bangalore-560019 |
| 4. | Publisher's Name | | Sri. B.R. Ravindranath on behalf of the BMSree Smaraka Pratishtana, (Regd.) |
| | Whether Citizen of India | — | Yes |
| | Address | — | BMSree Smaraka Pratishtana, 3rd Main, NR Colony, Bangalore-560019 |
| 5. | Editor's Name | — | Sri. B.R. Ravindranath |
| | Whether Citizen of India | — | Yes |
| | Address | — | BMSree Smaraka Pratishtana, 3rd Main, NR Colony, Bangalore-560019 |

I, B.R. Ravindranath here by Declare that the particulars given are true to the best of my knowledge and belief.

Bangalore

1st March, 2017

Sd/-

B.R. Ravindranath

**HONGANASU KANNADA MONTHLY**
**RNI No. KAR/KAN/2015/64049**
**REGISTERED**
**Post office Registration No.RNP/KA/BGS/2229/2015-2017**
**Office of Posting: Bangalore PSO, Bangalore 560026**
**Price :Annual Subscription Rs. 20/-**
**Date of publishing and Posting : 28-02-2017**

## ೨೦೧೭ ಫೆಬ್ರವರಿ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದಲ್ಲಿ ವಿವಿಧ ಹಂತದ ಸಂರಕ್ಷಣಾ ಕಾರ್ಯವು ನಡೆಯುತ್ತಿದೆ. ೨೦೧೭ರ ಫೆಬ್ರವರಿ ತಿಂಗಳಿನಲ್ಲಿ ೩ ಗ್ರಂಥಗಳ ಶುಷ್ಕ ಶುದ್ಧೀಕರಣ, ೨ ಗ್ರಂಥಗಳಿಗೆ ತೈಲ/ಮಸಿ ಲೇಪನ ಕಾರ್ಯ, ೧೨ ಗ್ರಂಥಗಳಲ್ಲಿ ಪತ್ರಗಳ ಮರುಜೋಡಣೆ ಕಾರ್ಯ, ೫೯ ಗ್ರಂಥಗಳಿಗೆ ಅಟ್ಟೆಕಟ್ಟಿದ ಕಾರ್ಯ, ೧೪ ಗ್ರಂಥಗಳಿಗೆ ಬಟ್ಟೆ ಕಟ್ಟುವಿಕೆ ಕಾರ್ಯ , ಮತ್ತು ೧೨ಗ್ರಂಥಗಳಿಗೆ ಸೂಚಿಯನ್ನು ತಯಾರಿಸಿದೆ, ೧೨೬ ಗರಿಗಳಿಗೆ ಸ್ಕ್ಯಾನ್ ಮಾಡಲಾಗಿದೆ.

### ಪುಸ್ತಕ ಬಿಡುಗಡೆ

"ಸಿಂಚನ" ಕನ್ನಡ ವೇದಿಕೆ ಪ್ರಕಟನೆ –28

ದಿನಾಂಕ : 18–2–2017ರಂದು ಶನಿವಾರಆರ್.ವಿ. ಇನ್‌ಸ್ಟಿಟ್ಯೂಟ್ ಆಫ್ ಮ್ಯಾನೇಜ್ ಮೆಂಟ್ ನ "ಸಮಾವೇಶ ಸಭಾಂಗಣ" ದಲ್ಲಿ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಆಂತರಿಕ ಲೆಕ್ಕ ಪರಿಶೋಧಕಶ್ರೀ ಶೃಂಗೇರಿ ಶ್ರೀನಿವಾಸಮೂರ್ತಿ ಅವರು ರಚಿಸಿದ ರಂಗಶ್ಯಾಮನ ವಚನಗಳು ಎಂಬ ಪುಸ್ತಕ ಬಿಡುಗಡೆಯಾಯಿತು.

ಪ್ರೊ. ಜಿ. ಅಶ್ವತ್ಥನಾರಾಯಣ ಅವರು ಗ್ರಂಥ ಪರಿಚಯವನ್ನು ಮಾಡಿದರು. ಶ್ರೀ ಕೆ.ವಿ. ಆರ್.ಠಾಗೂರ್ ಅವರು ಗ್ರಂಥ ಬಿಡುಗಡೆ ಮಾಡಿದರು. ಡಾ|| ದೊಡ್ಡರಂಗೇಗೌಡ ಅವರು ಅಧ್ಯಕ್ಷತೆ ವಹಿಸಿದ್ದರು.

### ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆಚಂದಾ

ಪ್ರತಿಷ್ಠಾನವು ಪ್ರಕಟಿಸುತ್ತಿರುವ ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ ವಿವರ: ವಾರ್ಷಿಕ ರೂ. 100/– (ವರ್ಷದಲ್ಲಿ ಎರಡು ಸಂಚಿಕೆಗಳನ್ನು ಪ್ರಕಟಿಸಲಾಗುತ್ತಿದೆ) ಆಜೀವ ಚಂದಾ ರೂ. 1500/– ಆಗಿರುತ್ತದೆ. ಎಲ್ಲಾ ಸಾಹಿತ್ಯಾಸಕ್ತರೂ ಈ ವಿದ್ವತ್ ಪತ್ರಿಕೆಗೆ ಚಂದಾದಾರಾಗಬೇಕೆಂದು ಕೋರುತ್ತೇವೆ.

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath

**ಅಚ್ಚಾದ ಪುಸ್ತಕ** ತೆರೆದ–ಅಂಚೆ

ಶ್ರೀಮತಿ/ಶ್ರೀ.........................................................................................

.........................................................................................

.........................................................................................

ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭